# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ.ಎಸ್.ನಾಗರಾಜ್, (ಸಂದೇಶ ನಾಗರಾಜ್), (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು), |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 565 (592) |
| ಉತ್ತರಿಸಬೇಕಾದ ದಿನಾಂಕ | : | 10.03.2020. |
| ಉತ್ತರಿಸಬೇಕಾದವರು | : | ಮಾನ್ಯ ನಗರಾಭಿವೃದ್ಧಿ ಸಚಿವರು. |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ನಗರದ ಹೊಸ ಬಡಾವಣೆಗಳಿಗೆ ಕೃಷ್ಣರಾಜಸಾಗರ ಹಿನ್ನೀರಿನ ಬಳಿಯ ಉಂಡವಾಡಿ ಗ್ರಾಮದ ಬಳಿಯಿಂದ ಕುಡಿಯುವ ನೀರಿನ ಪೂರೈಕೆ ಯೋಜನೆಯನ್ನು ರೂಪಿಸಲಾಗಿದೆಯೇ; ಯೋಜನೆ ಯಾವ ಹಂತದಲ್ಲಿದೆ; ಯಾವಾಗ ಪೂರ್ಣಗೊಳಿಸಲಾಗುವುದು; (ವಿವರಗಳನ್ನು ಒದಗಿಸುವುದು) | ಹೌದು.<br><br>ಸರ್ಕಾರದ ಆದೇಶ ಸಂಖ್ಯೆ ನಅಇ 15 ಯುಡಬ್ಲ್ಯೂಎಸ್ 2018, ದಿನಾಂಕ 21-02-2019 ರಲ್ಲಿ ಹಳೇ ಉಂಡವಾಡಿ ಗ್ರಾಮದ ಬಳಿ ಕಾವೇರಿ ನದಿ ಮೂಲದಿಂದ ಮೈಸೂರು ನಗರ, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ ಹಾಗೂ ಮೈಸೂರು ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಮತ್ತು ವ್ಯಾಪ್ತಿಯ ಹೊರಗಡೆ ಬರುವ 92 ಗ್ರಾಮಗಳಿಗೆ ಕುಡಿಯುವ ನೀರು ಸರಬರಾಜು ಮಾಡುವ ಯೋಜನೆಯ ಮೊದಲನೇ ಹಂತದ ಕಾಮಗಾರಿಯನ್ನು ರೂ.350.00 ಕೋಟಿಗಳ ಅಂದಾಜಿನಲ್ಲಿ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.<br><br>ಈ ಯೋಜನೆಗೆ ಅವಶ್ಯಕವಿರುವ 30 ಎಕರೆ 31 ಗುಂಟೆ ಸರ್ಕಾರಿ ಜಮೀನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡ ಮಂಡಳಿಗೆ ಹಸ್ತಾಂತರವಾಗಬೇಕಾಗಿರುತ್ತದೆ. ಇದಲ್ಲದೆ, ಮಂಡಳಿಯು 92 ಎಕರೆ ಖಾಸಗಿ ಜಮೀನನ್ನು ಸ್ವಾಧೀನ ಪಡಿಸಿಕೊಳ್ಳಲು ನೇರ ಖರೀದಿ ಮಾಡಲು ನಿರ್ಧರಿಸಿದ್ದು, ಪ್ರಕ್ರಿಯೆ ಚಾಲನೆಯಲ್ಲಿರುತ್ತದೆ. ಅವಶ್ಯಕ ಜಮೀನನ್ನು ಹಸ್ತಾಂತರಿಸಿದ ನಂತರ 3 ವರ್ಷಗಳಲ್ಲಿ ಈ ಯೋಜನೆಯನ್ನು ಕಾರ್ಯಗತಗೊಳಿಸಲು ಯೋಜಿಸಲಾಗಿದೆ. |
| ಆ) | ಈ ಬಗ್ಗೆ ಯೋಜನೆ ರೂಪಿಸದೇ ಇದ್ದಲ್ಲಿ ಹೊಸದಾಗಿ ಕೂಡಲೇ ಯೋಜನೆಯನ್ನು ರೂಪಿಸಿ ಮೈಸೂರು ನಗರದ ಹೊಸ ಬಡಾವಣೆಗಳಿಗೆ ಕುಡಿಯುವ ನೀರನ್ನು ಒದಗಿಸಲು ಕ್ರಮ ಜರುಗಿಸಲಾಗುವುದೇ? | ಮೇಲಿನ ಯೋಜನೆಯಲ್ಲಿ ಕೇವಲ ಸಗಟು ನೀರನ್ನು ಪಂಪು ಮಾಡಲು ಮಾತ್ರ ಯೋಜಿಸಲಾಗಿದ್ದು ಮೈಸೂರು ನಗರದ ಹೊಸ ಬಡಾವಣೆಗಳಿಗೆ ಕುಡಿಯುವ ನೀರನ್ನು ಒದಗಿಸಲು ಪ್ರತ್ಯೇಕವಾಗಿ ಎರಡನೇ ಹಂತದ ಸಮಗ್ರ ಸಂಗ್ರಹ ಹಾಗೂ ವಿತರಣಾ ಜಾಲದ ಯೋಜನೆಯು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಪರಿಶೀಲನೆಯಲ್ಲಿರುತ್ತದೆ. |

**ನಅಇ 34 ಯುಎಂಎಸ್ 2020**

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು